

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 907 |
| ಸದಸ್ಯರ ಹೆಸರು | ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21.12.2021 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರೀಕರ ಸಬಲೀಕರಣ ಸಚಿವರು. |

| | | |
|---|---|---|
| ಅ) | ರಾಜ್ಯದಲ್ಲಿ ಖನಿಜ ಪರವಾನಗಿ ಯಿಲ್ಲದೆ ನಡೆಸುತ್ತಿರುವ ಅಕ್ರಮ ಕಲ್ಲುಗಣಿಗಾರಿಕೆ ನಿಯಂತ್ರಣಕ್ಕೆ ಸರ್ಕಾರ ಯಾವ ಯಾವ ಕ್ರಮಗಳನ್ನು ಕೈಗೊಂಡಿದೆ; (ವಿವರ ನೀಡುವುದು) | ರಾಜ್ಯದಲ್ಲಿ ಕಲ್ಲುಗಣಿಗಾರಿಕೆ ನಡೆಸಲು ಗುತ್ತಿಗೆ ಪಡೆಯದೆ ಅಕ್ರಮ ಕಲ್ಲುಗಣಿಗಾರಿಕೆ ನಡೆಸುವವರ ವಿರುದ್ಧ ಎಂ.ಎಂ. (ಡಿ & ಆರ್) ಕಾಯ್ದೆ, 1957 ಹಾಗೂ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರಡಿ ಮೊಕದ್ದಮೆಗಳನ್ನು ದಾಖಲಿಸಲು ಹಾಗೂ ದಂಡ ವಿಧಿಸಿ ಸಂಗ್ರಹಿಸಲು ಕ್ರಮ ವಹಿಸಲಾಗುತ್ತಿದೆ.<br>ಕಳೆದ 03 ವರ್ಷಗಳಲ್ಲಿ ಕೈಗೊಂಡ ಕ್ರಮಗಳ ವಿವರ ಕೆಳಕಂಡಂತಿದೆ: |

| ವರ್ಷ | ಪತ್ತೆಹಚ್ಚಿದ ಪ್ರಕರಣಗಳ ಸಂಖ್ಯೆ | ವಿಧಿಸಿದ ದಂಡ (ರೂ.ಲಕ್ಷಗಳಲ್ಲಿ | ದಾಖಲಿಸಿರುವ ಮೊಕದ್ದಮೆಗಳು |
|---|---|---|---|
| 2018-19 | 413 | 1213.37 | 108 |
| 2019-20 | 266 | 908.70 | 117 |
| 2020-21 | 555 | 1576.62 | 149 |
| ಒಟ್ಟು | 1234 | 3698.69 | 374 |

ರಾಜ್ಯದಲ್ಲಿ ಖನಿಜ ಪರವಾನಗಿಯಿಲ್ಲದೆ ನಡೆಸುತ್ತಿರುವ ಅಕ್ರಮ ಕಲ್ಲು ಗಣಿಗಾರಿಕೆಯನ್ನು ನಿಯಂತ್ರಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.

1. ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಐ 21 ಎಂಎಂಎನ್ (2) 2014, ದಿನಾಂಕ 21.01.2014 ರಂತೆ ಗಣಿ ಮತ್ತು ಖನಿಜ (ಅಭಿವೃದ್ಧಿ ಮತ್ತು ನಿಯಂತ್ರಣ) ಕಾಯ್ದೆ, 1957ರ ಕಲಂ 21 ಹಾಗೂ 22 ರಡಿ ಮತ್ತು ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ನಿಯಮ 43 ಮತ್ತು 46 ರಂತೆ ಅನಧಿಕೃತ ಗಣಿಗಾರಿಕೆ, ಸಾಗಾಣಿಕೆ-

| | | |
|---|---|---|
| | | –ಮತ್ತು ದಾಸ್ತಾನು ವಿರುದ್ಧ ಕ್ರಮವಹಿಸಲು, ಕಂದಾಯ, ಅರಣ್ಯ, ಪೊಲೀಸ್ ಹಾಗೂ ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಧಿಕಾರಿಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ.<br>2. ಗಣಿ ಮತ್ತು ಭೂವಿಜ್ಞಾನ ಇಲಾಖೆಯಲ್ಲಿ ಖನಿಜಗಳ ಗಣಿಗಾರಿಕೆಗಾಗಿ ಗಣಿ ಗುತ್ತಿಗೆಗಳನ್ನು ಪಾರದರ್ಶಕವಾಗಿ ಹರಾಜು ಮೂಲಕ ಮಂಜೂರು ಮಾಡಲಾಗುತ್ತಿದೆ.<br>3. ಗಣಿ ಮತ್ತು ಭೂವಿಜ್ಞಾನ ಇಲಾಖೆಯಿಂದ ರಾಜ್ಯದಲ್ಲಿ ಮಂಜೂರು ಮಾಡಿರುವ ಕಲ್ಲು ಗಣಿಗುತ್ತಿಗೆ ಪ್ರದೇಶಗಳಲ್ಲಿ ಹಾಗೂ ಕಲ್ಲು ಗಣಿಗುತ್ತಿಗೆ ಪ್ರದೇಶವನ್ನು ಒತ್ತುವರಿ ಮಾಡಿ ನಿಯಮ ಉಲ್ಲಂಘಿಸಿ ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ಉಪಖನಿಜವನ್ನು ಉತ್ಪಾದಿಸಿ, ಸಾಗಾಣಿಕೆ ಮಾಡಿರುವುದನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಕೇಂದ್ರ (KSRSAC) ರವರಿಂದ ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಡ್ರೋಣ್/ ಡಿ.ಜಿ.ಪಿ.ಎಸ್ ಸರ್ವೆ ಕೈಗೊಂಡು ಮೂಲ ಖನಿಜ ಉತ್ಪಾದನಾ ಸ್ಥಳದಲ್ಲಿ ರಾಜಧನ ಸೋರಿಕೆ ತಡೆಗಟ್ಟಲು ಕ್ರಮ ವಹಿಲಾಗುತ್ತಿದೆ.<br>4. Integrated Lease Management System (ILMS) version-II ಜಾರಿಗೊಳಿಸಲಾಗುತ್ತಿದ್ದು, ಅನಧಿಕೃತ ಖನಿಜ ಸಾಗಾಣಿಕೆಯನ್ನು ತಡೆಗಟ್ಟಲು ಖನಿಜ ಸಾಗಾಣಿಕಾ ವಾಹನಗಳಿಗೆ GPS ಅಳವಡಿಸಿ ಕೇಂದ್ರೀಕೃತವಾಗಿ ನಿಗಾವಹಿಸಲು ತಂತ್ರಾಂಶ ರೂಪಿಸಲಾಗಿರುತ್ತದೆ.<br>5. ಅನಧಿಕೃತ ಖನಿಜ ಸಗಾಣಿಕೆಯನ್ನು ಪತ್ತೆ ಹಚ್ಚಲು ಖನಿಜ ರವಾನೆ ಪರವಾನಿಗೆ ಕಡ್ಡಾಯಗೊಳಿಸಲಾಗಿದ್ದು, ಖನಿಜ ರವಾನೆ ಪರವಾನಗಿ ವಿಶೇಷ ರಕ್ಷಣಾತ್ಮಕ ಹಾಳೆಯಲ್ಲಿ ವಿತರಿಸಲಾಗುತ್ತಿದೆ.<br>6. ಮಂಜೂರಾದ ಗಣಿ / ಕಲ್ಲುಗಣಿ ಗುತ್ತಿಗೆ ಪ್ರದೇಶಗಳನ್ನು ಹೊರತುಪಡಿಸಿ ಗುತ್ತಿಗೆ ಪ್ರದೇಶದ ಹೊರಭಾಗದಲ್ಲಿ ಒತ್ತುವರಿ ಮಾಡಿ ಗಣಿಗಾರಿಕೆ ನಡೆಸುವುದನ್ನು ತಡೆಗಟ್ಟಲು Geo-fencing ಅಳವಡಿಸಿ ನಿರ್ವಹಿಸಲು ಕ್ರಮ ಕೈಗೊಳ್ಳಲಾಗುತ್ತಿದೆ |

| | | |
|---|---|---|
| | | 7. ಅನಧಿಕೃತ ಗಣಿಗಾರಿಕೆಯನ್ನು ತಡೆಗಟ್ಟಲು ಖನಿಜ ರಕ್ಷಣಾ ಪಡೆ ಸ್ಥಾಪಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>8. ಅನಧಿಕೃತ ಕಲ್ಲು ಗಣಿಗಾರಿಕೆ / ಸಾಗಾಣಿಕೆಯನ್ನು ನಿಯಂತ್ರಿಸಲು ಜಿಲ್ಲಾ ಟಾಸ್ಕ್ ಫೋರ್ಸ್ (ಗಣಿ) ಸಮಿತಿಯಿಂದ ರಾಜ್ಯದಲ್ಲಿ ಆಯಾಕಟ್ಟಿನ ಪ್ರದೇಶಗಳಲ್ಲಿ ತನಿಖಾ ಠಾಣೆಗಳನ್ನು ತೆರೆದು ಕಾರ್ಯ ನಿರ್ವಹಿಸಲಾಗುತ್ತಿದೆ.<br>9. ಅಲ್ಲದೆ ಆಯಾ ಜಿಲ್ಲಾ ವ್ಯಾಪ್ತಿಗಳಲ್ಲಿ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಚಾಲಿತ ದಳಗಳನ್ನು ರಚಿಸಿಕೊಂಡು ಅನಧಿಕೃತ ಕಲ್ಲು ಗಣಿಗಾರಿಕೆ/ ಸಾಗಾಣಿಕೆಯನ್ನು ನಿಯಂತ್ರಿಸಲಾಗುತ್ತಿದೆ. |
| ಆ) | ಅಕ್ರಮ ಕಲ್ಲುಗಣಿಗಾರಿಕೆ ನಿಯಂತ್ರಣಕ್ಕೆ ಡ್ರೋನ್ ಸಮೀಕ್ಷೆ ಕೈಗೊಳ್ಳಲು 2020-21 ನೇ ಸಾಲಿನಲ್ಲಿ ಮಂಜೂರಾದ ಅನುದಾನವೆಷ್ಟು; ಈ ಸಮೀಕ್ಷೆಯನ್ನು ಹಾಸನ ಜಿಲ್ಲೆಯಲ್ಲಿ ನಡೆಸಲಾಗಿದೆಯೇ; ಈ ಸಮೀಕ್ಷೆಯಿಂದ ಎಷ್ಟು ಅಕ್ರಮ ಕಲ್ಲು ಗಣಿಗಾರಿಕೆಗಳನ್ನು ಗುರುತಿಸಲಾಗಿದೆ; (ಅವುಗಳ ವಿವರವನ್ನು ನೀಡುವುದು) | ಸರ್ಕಾರದ ಆದೇಶ ಸಂಖ್ಯೆ ಸಿಐ 70 ಎಂಜಿಎಸ್ 2020, ದಿನಾಂಕ 10.09.2020 ರಂತೆ ಚಾಲ್ತಿಯಲ್ಲಿರುವ ಕಲ್ಲುಗಣಿ ಗುತ್ತಿಗೆ ಪ್ರದೇಶಗಳಲ್ಲಿ ಗುತ್ತಿಗೆದಾರರು ಸಂಚಿತ ಆಡಿಟ್ ಪ್ರಮಾಣಕ್ಕಿಂತ ಅಧಿಕವಾಗಿ ತೆಗೆದಿರುವ ಉಪಖನಿಜದ ಪ್ರಮಾಣವನ್ನು ಡ್ರೋಣ್/ ಡಿಜಿಪಿಎಸ್ ಸಮೀಕ್ಷೆಯಿಂದ ಅಂದಾಜಿಸಿ, ಕ್ವಾರಿಪಿಟ್‌ನ Reduced Level ಗಳನ್ನು ನಿಗದಿಪಡಿಸುವ ಸಂಬಂಧ ಆದೇಶ ಜಾರಿ ಮಾಡಿ, 2020-21 ನೇ ಸಾಲಿನಲ್ಲಿ ರೂ.8.00 ಕೋಟಿಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿತ್ತು.<br>ಆದರೆ, ಸದರಿ ಸಾಲಿನಲ್ಲಿ ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಡ್ರೋಣ್ ಸರ್ವೆ ಕಾರ್ಯ ನಡೆಸಲು ಸೇವಾದಾರರನ್ನು ಇ-ಟೆಂಡರ್ ಮೂಲಕ ಆಯ್ಕೆ ಮಾಡುವ ಪ್ರಕ್ರಿಯೆಯು ಚಾಲ್ತಿಯಲ್ಲಿದ್ದು ಹಾಗೂ ಸದರಿ ಟೆಂಡರ್ ಪ್ರಕ್ರಿಯೆಯಲ್ಲಿ ಬಿಡ್ ದಾರರುಗಳು ಭಾಗವಹಿಸದೇ ಇದ್ದ ಕಾರಣದಿಂದ ಸದರಿ ಅನುದಾನವನ್ನು ವೆಚ್ಚ ಮಾಡಲು ಸಾಧ್ಯವಾಗಿರುವುದಿಲ್ಲ.<br>ಈ ಹಿನ್ನೆಲೆಯಲ್ಲಿ, 2021-22ನೇ ಸಾಲಿನಲ್ಲಿ Karnataka State Remote Sensing Applications Centre (KSRSAC) ರವರಿಂದ ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಡ್ರೋಣ್ ಸರ್ವೆ ಕೈಗೊಂಡು ಹೆಚ್ಚುವರಿಯಾಗಿ ತೆಗೆದಿರುವ ಉಪಖನಿಜವನ್ನು ಪತ್ತೆಹಚ್ಚಲು ಕ್ರಮವಹಿಸಲಾಗುತ್ತಿದೆ. |

ಹಾಸನ ಜಿಲ್ಲೆಯು ಒಳಗೊಂಡಂತೆ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ Karnataka State Remote Sensing Applications Centre (KSRSAC) ರವರಿಂದ ಡ್ರೋಣ್ / ಡಿಜಿಪಿಎಸ್ ಸರ್ವೆ ನಡೆಸಿ ತೆಗೆದಿರುವ ಉಪಖನಿಜದ ಪ್ರಮಾಣವನ್ನು ಅಂದಾಜಿಸಿ ನಿಯಮಾನುಸಾರ ಕ್ರಮ ವಹಿಸಲಾಗುತ್ತಿದೆ.

ಇ) ಗಣಿಗಾರಿಕೆಯಿಂದ ತೊಂದರೆಗೊಳಗಾದ ಪ್ರದೇಶಗಳ ಅಭಿವೃದ್ಧಿ ಮತ್ತು ಜನರ ಜೀವನ ಮಟ್ಟ ಸುಧಾರಣೆಗೆ ಗುತ್ತಿಗೆದಾರರಿಂದ ಜಿಲ್ಲಾ ನಿಧಿಗೆ ರಾಜಧನ ಸಂಗ್ರಹ ಮಾಡಲಾಗುತ್ತಿದೆಯೇ; ಮಾಡುತ್ತಿದ್ದಲ್ಲಿ ಕಳೆದ 03 ವರ್ಷಗಳಲ್ಲಿ ಹಾಸನ ಜಿಲ್ಲೆಯಲ್ಲಿ ಸಂಗ್ರಹವಾದ ಮತ್ತು ಬಳಕೆ ಮಾಡಿರುವ ವಂತಿಗೆ ಎಷ್ಟು? (ಜಿಲ್ಲಾವಾರು ವಿವರವನ್ನು ನೀಡುವುದು)

ಹೌದು.

ಹಾಸನ ಜಿಲ್ಲೆಯಲ್ಲಿ ಜಿಲ್ಲಾ ಖನಿಜ ಪ್ರತಿಷ್ಠಾನ ಟ್ರಸ್ಟ್ ನಿಧಿಯಲ್ಲಿ ಕಳೆದ ಮೂರು ವರ್ಷಗಳಿಂದ ರೂ.878.20 ಲಕ್ಷಗಳನ್ನು ಸಂಗ್ರಹಿಸಲಾಗಿರುತ್ತದೆ. ಸದರಿ ಅನುದಾನದಲ್ಲಿ ವಿವಿಧ ಕಾಮಗಾರಿಗಳಿಗೆ, ಕೋವಿಡ್-19 ಸಾಂಕ್ರಾಮಿಕ ರೋಗ ಹರಡುವಿಕೆಯನ್ನು ತಡೆಗಟ್ಟಲು ಮತ್ತು ಆಸ್ಪತ್ರೆ ನಿರ್ವಹಣೆ ವೆಚ್ಚಗಳಿಗೆ ರೂ.670.85 ಲಕ್ಷ ಮೊತ್ತವನ್ನು ಬಿಡುಗಡೆ ಮಾಡಲಾಗಿರುತ್ತದೆ. ವಿವರ ಕೆಳಕಂಡಂತಿದೆ:

| ಕ್ರ ಸಂ | ಉದ್ದೇಶ | ಬಿಡುಗಡೆ ಮಾಡಿದ ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 1 | ಅಂಗನವಾಡಿ ಕಟ್ಟಡ ದುರಸ್ಥಿ ಕಾಮಗಾರಿ | 15.50 |
| 2 | ಶಾಲಾ ಕಟ್ಟಡ ಹಾಗೂ ಶೌಚಾಲಯ ದುರಸ್ಥಿ ಕಾಮಗಾರಿ | 99.00 |
| 3 | ಕುಡಿಯುವ ನೀರಿನ ಯೋಜನೆ | 21.30 |
| 4 | ಪಶು ಆಸ್ಪತ್ರೆ ಹಾಗೂ ಆಯುಷ್ ಕಟ್ಟಡ ದುರಸ್ಥಿ | 8.00 |
| 5 | ಆರೋಗ್ಯ ಕೇಂದ್ರಗಳ ಆವರಣಕ್ಕೆ ಕಾಂಪೌಂಡ್ ನಿರ್ಮಾಣ | 15.00 |
| 6 | ಪ್ರೌಢಶಾಲಾ ಶಿಕ್ಷಕರಿಗೆ ಕೌಶಲ್ಯ ಅಭಿವೃದ್ಧಿ ತರಬೇತಿ, ಪದವಿ ಪೂರ್ವ ಉಪನ್ಯಾಸಕರಿಗೆ ವಿಷಯಾಧಾರಿತ ತರಬೇತಿ ಮತ್ತು ಸರ್ಕಾರಿ ಪ್ರೌಢ ಶಾಲೆಗಳಿಗೆ, ಪದವಿ ಪೂರ್ವ ಕಾಲೇಜುಗಳಿಗೆ ಅಲ್-ಇನ್-ಒನ್ ಸ್ಮಾರ್ಟ್ ಕ್ಲಾಸ್ ಸೇವೆಗಳನ್ನು ಒದಗಿಸಲು | 399.30 |

| | | | | |
|---|---|---|---|---|
| | | 7 | ಸ್ಟೂಡೆಂಟ್ ಪೋಲೀಸ್ ಕೆಡೆಟ್ (ಎಸ್.ಪಿ.ಸಿ) ಕಾರ್ಯಕ್ರಮಕ್ಕೆ | 0.25 |
| | | 8 | ಮಾನ್ಯ ಉಚ್ಚ ನ್ಯಾಯಾಲಯದ ಪ್ರಕರಣ ಸಂಖ್ಯೆ: ಆರ್ ಎಫ್ ಎ-1260/2018 ರಂತೆ ತಹಶೀಲ್ದಾರರು ಅರಸೀಕೆರೆ ತಾಲ್ಲೂಕು ಇವರು ಠೇವಣಿ ಇಟ್ಟಿರುವ ಮೊತ್ತ | 5.50 |
| | | 9 | ಕೋವಿಡ್-19 (ಭಾರತ ಸರ್ಕಾರದ ಸೂಚನೆಯಂತೆ) | 15.00 |
| | | 10 | ಕೋವಿಡ್-19 ತಡೆಗಟ್ಟಲು ಆಸ್ಪತ್ರೆ ನಿರ್ವಹಣೆ ವೆಚ್ಚ (ನಿಯಮ 18(3)(i)ರಂತೆ) (ಕೋವಿಡ್-19ಗೆ ಮೀಸಲಿರಿಸಿರುವ ಅನುದಾನವನ್ನು ಹೊರತುಪಡಿಸಿ) | 92.00 |
| | | | ಒಟ್ಟು | 670.85 |
| | | | ಕಳೆದ ಮೂರು ವರ್ಷಗಳಿಂದ ಜಿಲ್ಲಾ ಖನಿಜ ಪ್ರತಿಷ್ಠಾನ ನಿಧಿಗೆ ಸಂಗ್ರಹವಾಗಿರುವ ವಂತಿಕೆಯ ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. | |

ಸಂಖ್ಯೆ: ಸಿಐ 645 ಎಂಎಂಎನ್ 2021

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು

2019-2020 ರಿಂದ 2021-22 (ಅಕ್ಟೋಬರ್-2021) ರವರೆಗೆ ಡಿಎಂಎಫ್ ಅಡಿಯಲ್ಲಿ ಸಂಗ್ರಹಿಸಿದ ಮೊತ್ತದ ವಿವರ

(ರೂ. ಲಕ್ಷಗಳಲ್ಲಿ)

| ಕ್ರಮ.ಸಂಖ್ಯೆ | ಜಿಲ್ಲೆ | 2019-20 | 2020-21 | 2021-22 (ಅಕ್ಟೋಬರ್-2021) |
|---|---|---|---|---|
| 1 | Ballari | 26615.56 | 31867.24 | 32710.63 |
| 2 | Kalaburagi | 5797.49 | 6386.22 | 4414.42 |
| 3 | Chitradurga | 6437.56 | 6833.33 | 6374.71 |
| 4 | Bagalkot | 1349.14 | 1256.63 | 986.28 |
| 5 | Koppal | 953.25 | 796.30 | 438.19 |
| 6 | Raichur | 912.28 | 887.86 | 171.68 |
| 7 | Chikkaballapura | 798.59 | 860.18 | 472.08 |
| 8 | Ramanagara | 790.54 | 832.58 | 425.04 |
| 9 | Bangalore Urban | 1089.07 | 823.21 | 434.03 |
| 10 | Tumkur | 610.44 | 856.96 | 417.63 |
| 11 | Bangalore Rural | 739.07 | 735.14 | 373.47 |
| 12 | Belgaum | 540.98 | 586.90 | 581.83 |
| 13 | Chamarajanagar | 501.64 | 450.22 | 250.33 |
| 14 | Uttara Kannada | 195.39 | 114.34 | 24.95 |
| 15 | Hassan | 363.68 | 389.94 | 148.16 |
| 16 | Dakshina kannada | 198.75 | 198.31 | 63.78 |
| 17 | Udupi | 182.94 | 234.42 | 105.99 |
| 18 | Chikkamagaluru | 188.22 | 232.13 | 162.76 |
| 19 | Kolar | 153.14 | 316.66 | 121.67 |
| 20 | Gadag | 114.63 | 131.16 | 69.89 |
| 21 | Dharwad | 154.96 | 156.35 | 84.27 |
| 22 | Haveri | 167.88 | 115.67 | 24.75 |
| 23 | Davanagere | 88.78 | 71.37 | 45.67 |
| 24 | Vijayapura | 64.65 | 110.20 | -10.06 |
| 25 | Mandya | 98.39 | 271.60 | 115.35 |
| 26 | Shivamogga | 28.63 | 41.77 | 11.07 |
| 27 | Mysuru | 40.09 | 59.24 | 24.41 |
| 28 | Bidar | 14.00 | 11.13 | 6.23 |
| 29 | Kodagu | 30.54 | 33.36 | 11.84 |
| 30 | Yadgir | 18.61 | 17.05 | 4.38 |
| | ಒಟ್ಟು | **49238.90** | **55677.47** | **49065.45** |